## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1223
ಸದಸ್ಯರ ಹೆಸರು : ಶ್ರೀ ಎನ್.ಎಸ್.ಬೋಸ್‌ರಾಜು
(ವಿಧಾನ ಸಭೆಯಿಂದ ಚುನಾಯಿತರಾದವರು)
ಉತ್ತರಿಸುವ ದಿನಾಂಕ : 21.12.2018.
ಉತ್ತರಿಸುವ ಸಚಿವರು : ಉಪ ಮುಖ್ಯಮಂತ್ರಿಯವರು

| ಪ್ರಶ್ನೆ | ಉತ್ತರ |
|---|---|
| ಅ) ರಾಯಚೂರು ಹೃದಯಭಾಗದಲ್ಲಿರುವ ಕೇಂದ್ರ ಕಾರಾಗೃಹವನ್ನು ನಗರದ ಹೊರಭಾಗಕ್ಕೆ ಸ್ಥಳಾಂತರಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು? | ದಿನಾಂಕ: 25.03.2017 ರಂದು ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರು ರಾಯಚೂರಿಗೆ ಭೇಟಿ ನೀಡಿ, ನೂತನ ಜಿಲ್ಲಾ ಕಾರಾಗೃಹ ನಿರ್ಮಾಣಕ್ಕೆ ಸಂಬಂಧಿಸಿದಂತೆ, ವಡವಟ್ಟಿ ಗ್ರಾಮದ ಸರ್ವೆ ನಂ. 99/1 ರಲ್ಲಿ ಸುಮಾರು 180 ಎಕರೆ ಜಾಗ ಲಭ್ಯವಿದ್ದು, ಇದರಲ್ಲಿ ರಸ್ತೆ ಬದಿಯಲ್ಲಿರುವ 30 ಎಕರೆ ಜಮೀನು, ಅಥವಾ ಪೊಲೀಸ್ ಫೈರಿಂಗ್ ರೇಂಜ್ ಪಕ್ಕದಲ್ಲಿ 18 ಎಕರೆ ಜಮೀನು ಅಥವಾ ಯರಗೇರ ವಿಶ್ವವಿದ್ಯಾಲಯದ ಕ್ಯಾಂಪ್ ಎದುರುಗಡೆ ಇರುವ ಸುಮಾರು 100 ಎಕರೆ ಜಮೀನುಗಳಲ್ಲಿ ಕಾರಾಗೃಹ ಮತ್ತು ವಸತಿಗೃಹಗಳನ್ನು ನಿರ್ಮಾಣ ಮಾಡಲು ಸೂಕ್ತವಾಗಿದ್ದು, ಇವುಗಳಲ್ಲಿ ಯಾವುದಾದರೂ ಒಂದು ಜಮೀನು ನೂತನ ಕಾರಗೃಹ ನಿರ್ಮಾಣ ಮಾಡಲು ಮಂಜೂರು ಮಾಡುವಂತೆ, ಜಿಲ್ಲಾಡಳಿತವನ್ನು ಕೋರಲಾಗಿರುತ್ತದೆ.<br><br>ಜಿಲ್ಲಾಡಳಿತವು ಜಮೀನು ಮಂಜೂರು ಮಾಡಿದ ನಂತರ ನೂತನ ಜಿಲ್ಲಾ ಕಾರಾಗೃಹ ನಿರ್ಮಿಸಿ, ಹಾಲಿ ನಗರದ ಹೃದಯ ಭಾಗದಲ್ಲಿರುವ ಜಿಲ್ಲಾ ಕಾರಾಗೃಹವನ್ನು ನಗರದ ಹೊರಭಾಗಕ್ಕೆ ಸ್ಥಳಾಂತರಿಸಲು ಕ್ರಮ ವಹಿಸಲಾಗುವುದು. |

ಹೆಚ್‌ಡಿ 17 ಬೆಳಗಾವಿ 2018

(ಡಾ. ಜಿ. ಪರಮೇಶ್ವರ)
ಉಪ ಮುಖ್ಯಮಂತ್ರಿ